


## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

# ಅಂತರರಾಷ್ಟ್ರೀಯ ಸಾಂಸ್ಕೃತಿಕ ಜಾಂಬೂರಿ

ಆಳ್ವಾಸ್ ಶಿಕ್ಷಣ ಸಂಕೀರ್ಣ, ಮೂಡಬಿದರೆ, ದಕ್ಷಿಣ ಕನ್ನಡ ಜಿಲ್ಲೆ

2022 ಡಿಸೆಂಬರ್ 21 ರಿಂದ 27ರ ವರೆಗೆ

ಕಛೇರಿ ವಿಳಾಸ: ಸ್ಕೌಟ್ ಗೈಡ್ ಕನ್ನಡ ಭವನ
ಮೂಡುಬಿದರೆ, ಕರ್ನಾಟಕ – 574227
Email: info@internationalculturaljamboree.org
Phone: +91 - 96638 67707 / 96638 47707

## ಸ್ಕೌಟ್ ಚಳವಳಿಯ ಆರಂಭ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಯುವ ಜನಾಂಗಕ್ಕಾಗಿ ಒಂದು ಸ್ವಯಂ ಪ್ರೇರಿತವಾದ ರಾಜಕೀಯೇತರ, ಶೈಕ್ಷಣಿಕ ಚಳವಳಿಯಾಗಿದೆ. ಯಾವುದೇ ಜನಾಂಗ, ಧರ್ಮ, ಜಾತಿ, ಭಾಷೆ, ವರ್ಣಗಳ ಭೇದವಿಲ್ಲದೆ, ಚಳವಳಿಯ ಸ್ಥಾಪಕರಾದ **ಲಾರ್ಡ್ ಬೇಡನ್ ಪೋವೆಲ್‌ರವರು** 1907ರಲ್ಲಿ ರೂಪಿಸಿದ ಉದ್ದೇಶ, ತತ್ವ ಮತ್ತು ವಿಧಾನಗಳಿಗೆ ಅನುಗುಣವಾದ ಮುಕ್ತ ಸಂಸ್ಥೆಯಾಗಿದೆ.

ಯುವಜನಾಂಗವು ಸ್ಥಳೀಯ, ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಸಮುದಾಯಗಳ ಜವಾಬ್ದಾರಿಯುತ ಸದಸ್ಯರಾಗಿ, ದೈಹಿಕ, ಬೌದ್ಧಿಕ, ಭಾವನಾತ್ಮಕ, ಸಾಮಾಜಿಕಮತ್ತುಆಧ್ಯಾತ್ಮಿಕ ಸಾಮರ್ಥ್ಯಗಳ ಪರಿಪೂರ್ಣ ಅಭಿವೃದ್ಧಿಗಾಗಿ ಶ್ರಮಿಸುವುದು ಚಳವಳಿಯ ಉದ್ದೇಶವಾಗಿದೆ.

1910ರಲ್ಲಿ ಕ್ರಿಸ್ಟಲ್ ಪ್ಯಾಲೆಸ್‌ನಲ್ಲಿ ನಡೆದ ಮೇಳದಲ್ಲಿ ಹೆಣ್ಣುಮಕ್ಕಳು ಹುಡುಗರ ಸಮವಸ್ತ್ರವನ್ನು ಧರಿಸಿ ಕಾಣಿಸಿಕೊಂಡು ಸ್ಕೌಟ್ ಚಳವಳಿಯನ್ನು ಸೇರುವ ಆಸೆಯನ್ನು ವ್ಯಕ್ತಪಡಿಸಿದರು. ಇದನ್ನು ಗಮನಿಸಿದ ಲಾರ್ಡ್ ಬೇಡನ್ ಪೊವೆಲ್ ರವರು ತಮ್ಮ ಸಹೋದರಿ **ಆಗ್ನೆಸ್ ಬೇಡನ್ ಪೊವೆಲ್‌ರವರ** ಸಹಕಾರದಿಂದ ಹೆಣ್ಣು ಮಕ್ಕಳಿಗಾಗಿ ಗೈಡ್ಸ್ ಚಳವಳಿಯನ್ನು ಆರಂಭಿಸಲು ತೀರ್ಮಾನಿಸಿದರು.

## ಭಾರತದಲ್ಲಿ ಸ್ಕೌಟಿಂಗ್

1909ರಲ್ಲಿ **ಕ್ಯಾಪ್ಟನ್ ಟಿ.ಹೆಚ್. ಬೇಕರ್‌ರವರು** ಬೆಂಗಳೂರಿನಲ್ಲಿ ಪ್ರಪ್ರಥಮ ಬಾರಿಗೆ ಸ್ಕೌಟ್ ತಂಡವನ್ನು ಪ್ರಾರಂಭಿಸಿದ್ದು, ನಂತರ ಪುಣೆ, ಸಿಮ್ಲಾ, ಮದರಾಸು, ಜಬ್ಬಲ್‌ಪುರ ಮತ್ತು ಮುಂಬಯಿಗಳಲ್ಲಿ ಸ್ಕೌಟ್ ತಂಡಗಳು ಆರಂಭವಾದವು. 1911ರಲ್ಲಿ ಯುವತಿಯರಿಗಾಗಿ ಮೊದಲ ತಂಡವು ಜಬ್ಬಲ್‌ಪುರದಲ್ಲಿ ಆರಂಭವಾಯಿತು. ಸ್ವಾತಂತ್ರ್ಯ ನಂತರ ಭಾರತದಲ್ಲಿ ಪ್ರತ್ಯೇಕವಾಗಿ ಕಾರ್ಯನಿರ್ವಹಿಸುತ್ತಿದ್ದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳನ್ನು ಭಾರತದ ಅಂದಿನ ಪ್ರಧಾನಮಂತ್ರಿಗಳಾದ **ಪಂಡಿತ್ ಜವಹಾರಲಾಲ ನೆಹರು,** ಅಂದಿನ ಶಿಕ್ಷಣ **ಮಂತ್ರಿಗಳಾದ ಮೌಲಾನ ಅಬ್ದುಲ್ ಕಲಾಂ ಆಜಾದ್**, ಕೇಂದ್ರ ಪ್ರಾಂತ್ಯದ ರಾಜ್ಯಪಾಲರಾಗಿದ್ದ **ಶ್ರೀ ಮಂಗಲ್‌ದಾಸ್ ಪಕ್ವಾಸ್** ಮತ್ತು ಸ್ಕೌಟ್ ನಾಯಕರುಗಳಾಗಿದ್ದ **ಪಂಡಿತ್ ಹೃದಯನಾಥ ಕುಂಜ್ರು, ಪಂಡಿತ್ ಮದನ ಮೋಹನ ಮಾಲವೀಯ, ಪಂಡಿತ್ ಶ್ರೀ ರಾಮ್ ಬಾಜಪಾಯಿ,** ನ್ಯಾಯಮೂರ್ತಿ **ಶ್ರೀ ವಿಪಿನ್ ಬೋಸ್** ಮುಂತಾದವರ ಪ್ರಯತ್ನದಿಂದ ಒಂದಾಗಿ **ನವೆಂಬರ್ 7, 1950ರಲ್ಲಿ "ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್" ಸಂಸ್ಥೆಯು** ಅಸ್ತಿತ್ವಕ್ಕೆ ಬಂದಿತು.

## ಕರ್ನಾಟಕದಲ್ಲಿ ಸ್ಕೌಟಿಂಗ್

1917ರಲ್ಲಿ ಸ್ಕೌಟ್ ಚಳವಳಿಯು ಗಂಡು ಮಕ್ಕಳಿಗಾಗಿ **"ಬಾಯ್ಸ್ ಸ್ಕೌಟ್ ಆಫ್ ಮೈಸೂರು"** ಎಂಬ ಹೆಸರಿನಲ್ಲಿ ಅಧಿಕೃತವಾಗಿ ಆರಂಭವಾಯಿತು. ಮೈಸೂರಿನ

ಮಹಾರಾಜರಾಗಿದ್ದ **ಗೌರವಾನ್ವಿತ ನಾಲ್ವಡಿ ಕೃಷ್ಣರಾಜ ಒಡೆಯರ್ ರವರು** ಸಂಸ್ಥೆಯ ಪೋಷಕರಾಗಿದ್ದರು. ಸಂಸ್ಥೆಗೆ ವಿಶಿಷ್ಟವಾದ ಲಾಂಛನವಿತ್ತು. ಯುವರಾಜರಾಗಿದ್ದ **ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ರವರು** ಮುಖ್ಯ ಸ್ಕೌಟ್ ಆಗಿ ಮತ್ತು ರಾಜಕುಮಾರ **ಶ್ರೀ ಜಯಚಾಮರಾಜೇಂದ್ರ ಒಡೆಯರ್** ಅವರು ಮುಖ್ಯ ಕಬ್ ಆಗಿ ಸೇವೆ ಸಲ್ಲಿಸಿದ್ದರು. ಮೈಸೂರು ರಾಜ್ಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ ತಂಡಗಳನ್ನು ಆರಂಭಿಸಬೇಕೆಂದು ಮಹಾರಾಜ ರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು 1917ರಲ್ಲಿ ಆದೇಶಿಸಿದ್ದರು. 1927ರಲ್ಲಿ ಮೈಸೂರು ಮಹಾರಾಣಿಯವಾಗಿದ್ದ **ಶ್ರೀಮತಿ ವಾಣಿವಿಲಾಸ ಅಮ್ಮಣ್ಣಿ ಯವರು** ಚೀಫ್ ಗೈಡ್ ಆಗಿ ಗೈಡ್ ಚಳವಳಿಯನ್ನು ಆರಂಭಿಸಿದರು. ರಾಜ್ಯದಲ್ಲಿ ಈಗ ರಾಜ್ಯ ಸಂಸ್ಥೆಯ ಉಪಪೋಷಕರಾದ ರಾಜಮನೆತನದ ರಾಜಮಾತೆ ಡಾ. ಪ್ರಮೋದಾ ದೇವಿಯವರು ಸಂಸ್ಥೆಯ ಬೆಳವಣಿಗೆಗೆ ಮಾರ್ಗದರ್ಶನ ಮಾಡುತ್ತಿದ್ದಾರೆ.

ಕಳೆದ ಒಂದು ಶತಮಾನದಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಸಂಸ್ಥೆಯು ಕರ್ನಾಟಕದ ಎಲ್ಲಾ ಶಾಲಾ-ಕಾಲೇಜುಗಳಲ್ಲಿ ಕಬ್ಸ್-ಬುಲ್‌ಬುಲ್ಸ್ / ಸ್ಕೌಟ್ಸ್-ಗೈಡ್ಸ್ / ರೋವರ್ಸ್ ಮತ್ತು ರೇಂಜರ್ಸ್ ತಂಡಗಳನ್ನು ಹೊಂದಿ ಮಕ್ಕಳ ಮತ್ತು ಯುವಕರ ಸರ್ವತೋಮುಖ ಅಭಿವೃದ್ಧಿಗೆ ಸತತವಾಗಿ ಶ್ರಮಿಸುತ್ತಿದೆ. ಕರ್ನಾಟಕದ ಎಲ್ಲಾ ಘನ ಸರ್ಕಾರಗಳು ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯನ್ನು ಪ್ರೋತ್ಸಾಹಿಸಿವೆ. ತರಬೇತಿಯನ್ನು ಪಡೆದ ಘಟಕ ನಾಯಕರುಗಳು ಮಕ್ಕಳ ತರಬೇತಿಯಲ್ಲಿ ತೊಡಗಿಸಿಕೊಂಡಿದ್ದಾರೆ. **"ಕರ್ನಾಟಕ ದರ್ಶನ"** ದಂತಹ ಹೊಸ ಕಾರ್ಯಕ್ರಮಗಳನ್ನು ಕೈಗೊಂಡಿದ್ದೇವೆ. ಕಳೆದ ನೂರು ವರ್ಷಗಳಿಂದ ಕರ್ನಾಟಕದ ಮಕ್ಕಳಲ್ಲಿ ಶೈಕ್ಷಣಿಕ, ಭೌದ್ಧಿಕ, ದೈಹಿಕ ವಿಕಾಸದಜೊತೆಗೆ ಸೇವಾ ಮನೋಭಾವನೆಯನ್ನು ಮತ್ತು ಸಹೋದರತ್ವದ ಗುಣಗಳನ್ನು ಬೆಳೆಸುವುದರಲ್ಲಿ ನಾವು ಯಶಸ್ವಿಯಾಗಿದ್ದೇವೆ ಎಂಬ ಹೆಮ್ಮೆ ನನಗಿದೆ.

## ಅಂತರರಾಷ್ಟ್ರೀಯ ಸಾಂಸ್ಕೃತಿಕಜಾಂಬೂರಿಯ ಸಮಗ್ರ ಮಾಹಿತಿ:

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯಿಂದ ವಿಶ್ವದಲ್ಲಿಯೇ ಪ್ರಥಮ ಬಾರಿಗೆ ಆಯೋಜನೆಗೊಳ್ಳುತ್ತಿರುವ **"ಅಂತರರಾಷ್ಟ್ರೀಯ ಸಾಂಸ್ಕೃತಿಕ ಸ್ಕೌಟ್ಸ್-ಗೈಡ್ಸ್ ಜಾಂಬೂರಿ"** ಯನ್ನು ದಕ್ಷಿಣ ಕನ್ನಡ ಜಿಲ್ಲೆಯ ಮೂಡುಬಿದಿರೆಯಲ್ಲಿರುವ ವಿದ್ಯಾಗಿರಿಯ ಆಳ್ವಾಸ್ ಶಿಕ್ಷಣ ಸಂಸ್ಥೆಗಳ ಸಂಕೀರ್ಣದಲ್ಲಿ 2022ರ ಡಿಸೆಂಬರ್ 21 ರಿಂದ 27ರ ವರೆಗೆ ಏರ್ಪಡಿಸಲಾಗಿದೆ. ಇದೊಂದು ಅತ್ಯುತ್ತಮ ಸಾಂಸ್ಕೃತಿಕ ಕಲಾ ಸಂಗಮವಾಗಿದೆ. ದೇಶದ ವೈವಿಧ್ಯಮಯ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಯುವ ಮನಸ್ಸುಗಳನ್ನು ಬೆಸೆಯುವುದು. ಈ ಜಾಂಬೂರಿಯಉದ್ದೇಶ. ಭಾರತ್ ಸ್ಕೌಟ್ಸ್ ಗೈಡ್ಸ್‌ನ ಈ ವರ್ಷದಧ್ಯೇಯ ವಾಕ್ಯವಾದ **'ಏಕ್ ಭಾರತ್ ಶ್ರೇಷ್ಠ ಭಾರತ್'** ಈ ಸಾಂಸ್ಕೃತಿಕ ಜಾಂಬೂರಿಯಿಂದ ಸಾಕ್ಷಾತ್ಕಾರಗೊಳ್ಳಬೇಕೆಂಬುದು ನಮ್ಮ ಆಸೆ. ಈ ಅಂತಾರಾಷ್ಟ್ರೀಯ ಸಾಂಸ್ಕೃತಿಕ ಜಾಂಬೂರಿಯು

ರಾಜ್ಯದ ಸನ್ಮಾನ್ಯ ಮುಖ್ಯ ಮಂತ್ರಿಗಳೂ ಹಾಗೂ ಸ್ಕೌಟ್ಸ್ ಗೈಡ್ಸ್ ಸಂಸ್ಥೆಯ ಅಧ್ಯಕ್ಷರ ಮಾರ್ಗದರ್ಶನದಲ್ಲಿ ಯಶಸ್ವಿಯಾಗಿ ಆಚರಿಸಲಿದ್ದೇವೆ. ರಾಜ್ಯದ 36 ಶೈಕ್ಷಣಿಕ ಜಿಲ್ಲೆಗಳಿಂದ ಹಾಗೂ ಇತರೆ ನೆರೆ ರಾಜ್ಯಗಳು ಮತ್ತು ಹೊರ ರಾಷ್ಟ್ರಗಳಿಂದ ಸುಮಾರು 50,000 ಸ್ಕೌಟ್ಸ್-ಗೈಡ್ಸ್ ಚಳವಳಿಯ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಮತ್ತು ಶಿಕ್ಷಕ-ಶಿಕ್ಷಕಿಯರು ಈ ಅಂತರರಾಷ್ಟ್ರೀಯ ಸಾಂಸ್ಕೃತಿಕ ಜಾಂಬೋರಿಯಲ್ಲಿ ಭಾಗವಹಿಸುತ್ತಾರೆ.

## ಅಂತರಾಷ್ಟ್ರೀಯಜಾಂಬೂರಿಯ ಚಟುವಟಿಕೆಗಳು

- ನಿರ್ದಿಷ್ಟ ವಿಷಯಾಧಾರಿತ ನಿಧಾನಗತಿಯ ಓಟ **Slow Marathan** ನಿರ್ದಿಷ್ಟವಾದ ವಿಷಯದ ಪ್ರತಿಪಾದನೆಯೊಂದಿಗೆ ನೀಧಾನೋಟ... ಪ್ರಧಾನ ಓಟ...
- ಪಥಸಂಚಲನ... ಗಮನ ಸೆಳೆಯುವ ಆಕರ್ಷಣೆಯೊಂದಿಗೆ ಸ್ಕೌಟ್ ಚಳವಳಿಯ ಸಮಗ್ರತೆಯನ್ನು ಸಾರುವ ಪ್ರತೀಕವಾಗಿ – ಮನದಲ್ಲಿ ಸಂಚಲನ ಮೂಡಿಸುವ ನಡಿಗೆ... ಸ್ಕೌಟಿಂಗ್– ಗೈಡಿಂಗ್ ನಡೆಗೆ
- ಪರಿಚಯಾತ್ಮಕ ಪ್ರವಾಸ: ಝೂ, ಮೃಗಾಲಯ ಭೇಟಿ, ವಿಜ್ಞಾನಕೇಂದ್ರ, ತಾರಾಲಯ ವೀಕ್ಷಣೆ.
- ಪ್ರೇರಣಾತ್ಮಕ ಪ್ರದರ್ಶನ: ಕೃಷಿಮೇಳ, ಕೃಷಿಯ ಮಹತ್ವ, ಆಸಕ್ತಿ ಅರಳಿಸುವ ತೋಟಗಾರಿಕೆ ಬೆಳೆಗಳ ದರ್ಶನ.
- ವಿಜ್ಞಾನ ಮೇಳ: ಪ್ರಾಯೋಗಿಕ ಆಸಕ್ತಿ ಬೆಳೆಸುವ ತಾಂತ್ರಿಕ ಜ್ಞಾನಾಶಕ್ತಿ ಅರಳುವಿಕೆ ಹಾಗೂ, ಸಂಶೋಧನಾಶಕ್ತಿಗೆ ಪ್ರೇರಣೆ ನೀಡುವಂತಹ ಕಾರ್ಯ ವಿಧಾನಗಳ ದರ್ಶನ.
- ಕಲಾಮೇಳ: ರಾಷ್ಟ್ರದ ವಿವಿಧ ಪ್ರದೇಶಗಳ ಸಮಗ್ರ ಕಲಾ ಪ್ರಕಾರಗಳ ಪರಿಚಯ. ಹಿಂದಿನ... ಇಂದಿನ... ಮುಂದಿನ... ಬೆಳಕು ಚೆಲ್ಲುವ ಮಹತ್ವವನ್ನು ತಿಳಿಸುವ, ಯುವಕರ ಮನಸ್ಸಿನಲ್ಲಿ ಉಳಿಸುವ – ಒಂದೇ ಸೂರಿನಲ್ಲಿ ವೈವಿಧ್ಯತೆಯಲ್ಲಿ ಏಕತೆ ಮೂಡಿಸುವುದರ ಪ್ರಾಮಾಣಿಕ ಪ್ರಯತ್ನ.
- ಆಹಾರ ಮೇಳ: ಪ್ರಾದೇಶಿಕ ಹವಾಮಾನಾಧಾರಿತ ಆಹಾರ ಪದ್ಧತಿಯನ್ನು ಪರಿಚಯಿಸುವ – ಸಾನುಭವಗಳಿಸುವ ಅವಕಾಶ.
- ಕ್ರೀಡೆ–ಸಂಸ್ಕೃತಿ–ಸಾಂಪ್ರದಾಯಕ ಆಟಗಳ ಪ್ರಾತ್ಯಕ್ಷಿಕೆ–ತೊಡಗಿಸಿಕೊಳ್ಳಲು ಅವಕಾಶ ಮತ್ತು ಅದರ ಪ್ರಯೋಜನ, ವೀಕ್ಷಣೆ ಮತ್ತು ವಿನಿಮಯದ ಸದಾವಕಾಶವನ್ನು ಗುರುತಿಸುವಿಕೆಗೆ ಪೂರಕವಾದ – ಸಾಂಪ್ರದಾಯಗಳ ವಿನಿಮಯಕ್ಕೆ ಅವಕಾಶ
- ರಚನಾತ್ಮಕತೆಗೆ ಪ್ರೋತ್ಸಾಹ: ಮಾದರಿತಯಾರಿ – ಫೈಟಿಂಗ್ ಇತ್ಯಾದಿ ವೀಕ್ಷಣೆ.
- ಪುಷ್ಪಪ್ರದರ್ಶನ: ಪ್ರದರ್ಶನ ಬಗ್ಗೆ ಮತ್ತು ವ್ಯವಸ್ಥೆಯ ಬಗ್ಗೆ ಆಸಕ್ತಿ ಹೊಂದುವುದು – ಪ್ರದರ್ಶನ – ವೀಕ್ಷಣಾಸಕ್ತಿ.
- ಕಲಾಗ್ರಾಮ: ಸಾಂಪ್ರದಾಯಿಕ ಕಸುಬುಗಳ ಪ್ರಾತ್ಯಕ್ಷಿಕೆ, ಹಳತು–ಹೊಸತುಗಳ ಅಧ್ಯಯನಕ್ಕೆ ಪೂರಕವಾತಾವರಣ ನಿರ್ಮಾಣ.

- ಉತ್ತಮ ವಸತಿ ವ್ಯವಸ್ಥೆ: ಸರ್ವರಿಗೂ ರುಚಿಸುವ ಆಹಾರ ವ್ಯವಸ್ಥೆ.
- ಸರಳ – ಸುಂದರ ಉದ್ಘಾಟನಾ ಸಮಾರಂಭ.
- ಯೋಗ – ಧ್ಯಾನ: ಯೋಗಾಸನಗಳು ದೇಹಕ್ಕೆ ಸರಳ ವ್ಯಾಯಾಮವನ್ನು ಕಲ್ಪಿಸುತ್ತದೆ. ದೈಹಿಕ ಸದೃಢತೆಗೆ ಪೂರಕ, ಪ್ರತಿನಿತ್ಯ ಅನುಷ್ಠಾನಗೊಳಿಸುವುದರಿಂದ ದೀರ್ಘಕಾಲಿನ ಪ್ರಯೋಜನ ಲಭ್ಯವಾಗುತ್ತದೆ. ಧ್ಯಾನಮನಸ್ಸನ್ನು ನಿಯಂತ್ರಿಸಿ ಉದ್ದೇಶಿತ ಸಾಧನೆಯನ್ನು ಪ್ರಗತಿಯಲ್ಲಿ ಸಾಧಿಸಲು ಪೂರಕವಾಗಿರುತ್ತದೆ. ಜಾಂಬೂರಿಯಲ್ಲಿ ಡಿಸೆಂಬರ್ 23, 24, 25ರಂದು ತರಬೇತಿಗಳನ್ನು ನೀಡಿ 26ನೇ ತಾರೀಖಿಗೆ ಸಾಮೂಹಿಕತ್ವಕ್ಕೆ ಪ್ರೇರಕವಾದ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಮುಂದಿನ ಬುಲೆಟಿನ್‌ನಲ್ಲಿ ಹೆಚ್ಚಿನ ಮಾಹಿತಿಯನ್ನು ನೀಡಲಾಗುವುದು.

**ದಕ್ಷಿಣ ಕನ್ನಡ ಜಿಲ್ಲೆ:** ದಕ್ಷಿಣ ಕನ್ನಡ ಜಿಲ್ಲೆ ಕರ್ನಾಟಕ ರಾಜ್ಯದ ನೈರುತ್ಯ ದಿಕ್ಕಿನಲ್ಲಿರುವ ಕರಾವಳಿ ಜಿಲ್ಲೆಯಾಗಿದ್ದು, ಮಂಗಳೂರು ನಗರ ಜಿಲ್ಲೆಯ ಕೇಂದ್ರ ಸ್ಥಾನವಾಗಿದೆ. ಸುತ್ತ – ಮುತ್ತ ಹಚ್ಚಹಸಿರಿನ ಭತ್ತದ ಗದ್ದೆ, ತೆಂಗು, ಕಂಗು (ಅಡಿಕೆ), ಕೋಕೋ, ರಬ್ಬರ್, ಗೇರು, ಬಾಳೆ, ಮಾವು, ಹಲಸು ಮೊದಲಾದ ಗಿಡಮರಗಳ ನಡುವೆ ಪಶ್ಚಿಮ ಘಟ್ಟದ ಸಾಲಿನಲ್ಲೇ ಇರುವ ಬೆಟ್ಟ, ಗುಡ್ಡಗಳು, ಪರ್ವತದ ಸಾಲುಗಳು, ಕುಮಾರ ಧಾರ, ನೇತ್ರಾವತಿ, ಪಯಸ್ವಿನಿ, ಗುರುಪುರ, ಶಾಂಭವಿ ನದಿಗಳ ನಯನ ಮನೋಹರ ದೃಶ್ಯಗಳು, ಅರಬ್ಬೀ ಸಮುದ್ರದ ವಿಶಾಲ ಜಲರಾಶಿ ಇವೆಲ್ಲವೂ ಸೇರಿ ದಕ್ಷಿಣ ಕನ್ನಡ ಜಿಲ್ಲೆಯು ಕಂಗೊಳಿಸುತ್ತಿದೆ.

ದಕ್ಷಿಣ ಕನ್ನಡ ಬ್ಯಾಂಕಿಂಗ್ ಕ್ಷೇತ್ರದ ತವರು ಮನೆಯೆಂದೇ ಪ್ರಸಿದ್ಧಿಯನ್ನು ಪಡೆದಿರುವುದು ಸರ್ವವಿಧಿತ ಮಂಗಳೂರಿನ ರಾಸಾಯನಿಕ ಗೊಬ್ಬರ ಕಾರ್ಖಾನೆ **(MCF)** ನಮ್ಮ ರಾಜ್ಯದ ಏಕೈಕ ರಾಸಾಯನಿಕ ಗೊಬ್ಬರ ಉತ್ಪಾದನಾ ಘಟಕವಾಗಿದೆ.

**ಮೂಡುಬಿದರೆ:** ಮೂಡುಬಿದರೆಯು ಬೆಳೆಯುತ್ತಿರುವ ಪಟ್ಟಣವಾಗಿದ್ದು, ಮೂಡುಬಿದರೆ ತಾಲ್ಲೂಕು ಕೇಂದ್ರ ಸ್ಥಾನವಾಗಿದೆ. "ಜೈನಕಾಶಿ" ಎಂಬ ಪ್ರಸಿದ್ಧಿಯನ್ನು ಪಡೆದಿದ್ದು, ಇಲ್ಲಿ 18 ಬಸದಿಗಳಿದ್ದು, ಇವುಗಳಲ್ಲಿ ವಿಶ್ವಪ್ರಸಿದ್ಧಿ ಪಡೆದಿರುವ "ಸಾವಿರ ಕಂಬದ ಬಸದಿ" (ತ್ರಿಭುವನ ಚೂಡಾಮಣಿ) ಮತ್ತು ಮಲ್ಲಿನಾಥ ಬಸದಿಗಳು ಸೇರಿವೆ. ಸರ್ವಮತ ಧರ್ಮಗಳು ಸಾಮರಸ್ಯದಿಂದ ಬಾಳುವ ಪುಣ್ಯಭೂಮಿಯಾಗಿದೆ. "ಭೂತಕೋಲ" ಅಥವಾ ದೈವಶಕ್ತಿಗಳ ಆರಾಧನೆಯಂತಹ ವಿಶಿಷ್ಟವಾದ ಸಂಪ್ರದಾಯ ಆಚರಣೆಯಲ್ಲಿದೆ. ಕಂಬಳ ಅಥವಾ ಕೋಣಗಳ ಸ್ಪರ್ಧಾತ್ಮಕ ಓಟ ಜನಪ್ರಿಯ ಜಾನಪದ ಕ್ರೀಡೆಯಾಗಿದ್ದು, ಉತ್ತು–ಬಿತ್ತಿ ಭತ್ತ ಬೆಳೆಯುವ ಹಸನಾದ ಕೆಸರು ನೀರು ತುಂಬಿರುವ ಕೃಷಿ ಭೂಮಿಯಲ್ಲಿ ಈ ಕ್ರೀಡೆಯು ನಡೆಯುತ್ತಿದ್ದು ವಿಶಿಷ್ಟ ಜನಾಕರ್ಷಣೆಯನ್ನು ಹೊಂದಿದೆ. ಮೂಡುಬಿದಿರೆಯು ಅನೇಕ ಪ್ರಸಿದ್ಧ ಶಿಕ್ಷಣ ಸಂಸ್ಥೆಗಳಿಂದ ಕೂಡಿದ್ದು, "ವಿದ್ಯಾಕಾಶಿ"ಯಾಗಿ ಮುನ್ನಡೆಯುತ್ತಿದೆ.

**ಹವಾಮಾನ:** ವಾರ್ಷಿಕವಾಗಿ ಮಳೆ, ಚಳಿ, ಸೆಕೆಗಾಲವೆಂದು 3 ಬಗೆಯ ಹವಾಮಾನವಿದೆ. ನೈರುತ್ಯ ಮಾನ್‌ಸೂನ್ ವಾತಾವರಣಗಳಿಂದ ಜೂನ್ ತಿಂಗಳಿಂದ ಸೆಪ್ಟೆಂಬರ್ ತಿಂಗಳವರೆಗೆ ಮಳೆ ಬರುತ್ತಿರುತ್ತದೆ. ಇತ್ತೀಚೆಗೆ ಚಳಿ ಕಡಿಮೆಯಾಗುತ್ತಿದ್ದು, ಮಂಗಳೂರಿನಲ್ಲಿ 34 ಡಿಗ್ರಿ ಸೆಲ್ಸಿಯಸ್ ನಿಂದ 38 ಡಿಗ್ರಿ ಸೆಲ್ಸಿಯಸ್‌ವರೆಗೆ ಉಷ್ಣತೆ ಏರಿಳಿಯುತ್ತಿರುತ್ತದೆ.

## ದಕ್ಷಿಣ ಕನ್ನಡ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು:

ಧರ್ಮಸ್ಥಳ, ಸುಬ್ರಮಣ್ಯ, ಕಟೀಲು, ಕದ್ರಿ, ಕುದ್ರೋಳಿ, ಪೊಳಲಿ, ಸೋಮೇಶ್ವರ ಬೀಚ್, ಪಣಂಬೂರ್ ಬೀಚ್, ನವಮಂಗಳೂರು ಬಂದರು, ಸುರತ್ಕಲ್ ದೀಪಸ್ತಂಭ, ಸಂತ ಅಲೋಶಿಯಸ್ ಚಾಪೆಲ್, ಉಳ್ಳಾಲದ ದರ್ಗ, ಸುಲ್ತಾನ್ ಬತ್ತೇರಿ ಮುಂತಾದವುಗಳು.

### ಆಸಕ್ತಿದಾಯಕ ಪ್ರೇಕ್ಷಣೀಯ ಸ್ಥಳಗಳು:

ಕರ್ನಾಟಕವು ಅತ್ಯಂತ ಆಕರ್ಷಣೀಯ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಪ್ರವಾಸಿ ಕೇಂದ್ರಗಳನ್ನು ಹೊಂದಿದ್ದು, ಅವುಗಳಲ್ಲಿ ಕೆಳಗಿನವುಗಳು ಪ್ರಮುಖವಾಗಿವೆ.

| | |
|---|---|
| ➢ ಬೇಲೂರು – ಹಳೇಬೀಡು | ಹಾಸನ |
| ➢ ಹಂಪಿ | ಬಳ್ಳಾರಿ |
| ➢ ಗೋಲಗುಂಬಜ್ | ವಿಜಯಪುರ |
| ➢ ಏಕಶಿಲಾ ಗೊಮ್ಮಟ – ಶ್ರವಣಬೆಳಗೊಳ | ಹಾಸನ |
| ➢ ಗೋಕರ್ಣ, ಮುರ್ಡೇಶ್ವರ | ಉತ್ತರ ಕನ್ನಡ |
| ➢ ಆಗುಂಬೆ | ಚಿಕ್ಕಮಗಳೂರು |
| ➢ ಕೌಪುದೀಸ್ತಂಭ | ಉಡುಪಿ |
| ➢ ಮರವಂತೆ ಬೀಚ್ | ಉಡುಪಿ |
| ➢ ಮಣಿಪಾಲ | ಉಡುಪಿ |

### ಜಾಂಬೂರಿ ನಡೆಯುವ ಸ್ಥಳ:

ಅಂತರ ರಾಷ್ಟ್ರೀಯ ಸಾಂಸ್ಕೃತಿಕ ಜಾಂಬೂರಿಯು ಜೈನ ಕಾಶಿಯೆನಿಸಿದ ಮೂಡುಬಿದಿರೆಯ "ವಿದ್ಯಾ ಗಿರಿಯಲ್ಲಿರುವ ಆಳ್ವಾಸ್ ಶಿಕ್ಷಣ ಸಂಸ್ಥೆಗಳ ಸಂಕೀರ್ಣ"ದಲ್ಲಿ ಸುಮಾರು 100 ಎಕರೆ ವಿಸ್ತಾರದ ಪ್ರದೇಶದಲ್ಲಿ ನಡೆಯಲಿದೆ. ಜಾಂಬೂರಿ ನಡೆಯುವ ಈ ಕೇಂದ್ರ ಸ್ಥಳವು ಮಂಗಳೂರು ನಗರರೈಲ್ವೆ ನಿಲ್ದಾಣದಿಂದ 35 ಕಿ.ಮೀ., ಮುಲ್ಕಿ ರೈಲ್ವೆ ನಿಲ್ದಾಣದಿಂದ 26 ಕಿ.ಮೀ. ಮತ್ತು ಬಜಪೆ ವಿಮಾನ ನಿಲ್ದಾಣದಿಂದ 23 ಕಿ.ಮೀ., ದೂರದಲ್ಲಿದೆ. ಮಂಗಳೂರಿನಿಂದ ಕಾರ್ಕಳ ಎನ್‌ಹೆಚ್–169 ರಸ್ತೆಯ 35 ಕಿ.ಮೀ. ದೂರದಲ್ಲಿ ಮುಖ್ಯರಸ್ತೆಯ ಪಕ್ಕದಲ್ಲಿದೆ.

## ಜಾಂಬೂರಿ ಸ್ಥಳ ತಲುಪುವುದುಹೇಗೆ ?

1) ಮಂಗಳೂರು ಕೇಂದ್ರ ರೈಲ್ವೆ ನಿಲ್ದಾಣದಿಂದ 35 ಕಿ.ಮೀ. ಮತ್ತು ಮಂಗಳೂರು ನಗರ ಕೇಂದ್ರ ಬಸ್ ನಿಲ್ದಾಣದಿಂದ 35 ಕಿ.ಮೀ. ದೂರದಲ್ಲಿರುವ ವಿದ್ಯಾಗಿರಿಗೆ ಬಸ್/ ಕಾರ್ ಮೂಲಕ ಶುಲ್ಕವನ್ನು ಪಾವತಿಸಿ ಬಂದು ತಲುಪಬಹುದು.

2) ಬಜಪೆ ವಿಮಾನ ನಿಲ್ದಾಣದಿಂದ ಬಸ್ ಮೂಲಕ ಮಂಗಳೂರು ನಗರಕ್ಕೆ ಬಂದು ಬಸ್ ಮೂಲಕ ಅಥವಾ ಕಾರ್ ಮೂಲಕ ಶುಲ್ಕವನ್ನು ಪಾವತಿಸಿ ಬಂದು ತಲುಪಬಹುದು.

## ಧ್ಯೇಯ (THEME) "ಸಂಸ್ಕೃತಿಯಿಂದ ಯುವ ಜನರ ಏಕತೆ":

ಅಂತರ ರಾಷ್ಟ್ರೀಯ ಸಾಂಸ್ಕೃತಿಕ ಜಾಂಬೂರಿಯು ಯುವಜನತೆಯಲ್ಲಿ ಶಾಂತಿ, ಸೌಹಾರ್ದತೆ ಮತ್ತು ಸಮಗ್ರ ಏಕತೆಯನ್ನು ಸಾಧಿಸುವ ಗುರಿಯನ್ನು ಹೊಂದಿದೆ. ಜಾಂಬೂರಿಯು (ಬೇರೆ-ಬೇರೆ ರಾಷ್ಟ್ರ- ಅಂತರರಾಷ್ಟ್ರೀಯ ಮಟ್ಟದ) ವಿಶೇಷ ಜ್ಞಾನವನ್ನು ಗ್ರಹಿಸಲು, ಕೌಶಲ್ಯವನ್ನು ಗಳಿಸಲು ಮತ್ತು ವಿವಿಧ ಮೌಲ್ಯಗಳನ್ನು ವಿನಿಮಯ ಮಾಡಿ ಕೊಳ್ಳಲು, ಸಂಪ್ರದಾಯ ಜೀವನ ಶೈಲಿಗಳನ್ನು ಪರಸ್ಪರ ಹಂಚಿಕೊಳ್ಳಲು ಸುವರ್ಣ ಅವಕಾಶವನ್ನು ಕಲ್ಪಿಸಿಕೊಡುತ್ತದೆ. ಸಾಮಾಜಿಕ ಹಾಗೂ ಸಾಂಸ್ಕೃತಿಕ ವೈವಿಧ್ಯಗಳ ಸೂಕ್ಷ್ಮತೆಗಳಿಗೆ ಯುವ ಜನತೆ ಹೊಂದಿಕೊಳ್ಳುವ ಗುರಿಯನ್ನು ಪ್ರೇರೇಪಿಸುತ್ತದೆ.

## ಕಾರ್ಯಕ್ರಮ - ಚಟುವಟಿಕೆಗಳು:

ಜಾಂಬೂರಿಯ ದಿನಗಳಲ್ಲಿ ಸ್ಪರ್ಧಾತ್ಮಕ ಸಾಹಸಮಯ ಚಟುವಟಿಕೆಗಳನ್ನು ಅಳವಡಿಸಿಕೊಳ್ಳಲು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ವೈಯಕ್ತಿಕವಾಗಿ ಮತ್ತು ಗುಂಪುಗಳಲ್ಲಿ ಹಲವು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡುವುದರ ಮೂಲಕ ಆನಂದ ಪಡಲು ಸಾಕಷ್ಟು ಅವಕಾಶಗಳಿವೆ. ಮುಖ್ಯವಾಗಿ ಸ್ಕಿಲ್-ಒ-ರಾಮಾ, ಪಯೋನಿಯರಿಂಗ್, ಸಾಂಸ್ಕೃತಿಕ ಸಂಜೆ, ಸಮುದ್ರತೀರ ಚಾರಣ, ಮ್ಯಾರಥಾನ್, ಯೋಗ-ಧ್ಯಾನ, ಕೃಷಿಮೇಳ, ವಿಜ್ಞಾನ ಮೇಳ, ಕಲಾಮೇಳ, ಪುಸ್ತಕ ಮೇಳ, ಪಿಲಿಕುಳ ನಿಸರ್ಗ ಧಾಮ, ವಿಜ್ಞಾನಕೇಂದ್ರ, ಖಗೋಳ ವೀಕ್ಷಣಾಲಯ, ಪ್ರಾಣಿ ಸಂಗ್ರಹಾಲಯಗಳ ವೀಕ್ಷಣೆ- ಈ ಎಲ್ಲಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಅವಕಾಶವಿರುತ್ತದೆ.

**ಚರ್ಚೆಗಳು:** ವಿವಿಧ ರಾಜ್ಯಗಳ ಪ್ರತಿನಿಧಿಗಳು ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಾರೆ. ಚರ್ಚೆಯು **"ಪ್ಯಾಟ್ರೋಲ್ ಇನ್ ಕೌನ್ಸಿಲ್"** ಮತ್ತು **"ಸ್ಕೌಟ್ ಗೈಡ್ ದಳಗಳ ನಾಯಕರ ಸಮ್ಮೇಳನ"**ಗಳ ಮೂಲಕ ನಡೆಯುತ್ತದೆ. ಈ ವೇದಿಕೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು / ರೋವರ್ಸ್-ರೇಂಜರ್ಸ್‌ಗಳು ಚಳವಳಿಯಲ್ಲಿ ಪ್ರಸ್ತುತ ಇರುವ ಚಟುವಟಿಕೆಗಳು ಮತ್ತು ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿ ಮುಂದಿನ ದಿನಗಳಲ್ಲಿ ಯಾವ ರೀತಿಯ ಬದಲಾವಣೆಗಳನ್ನು ಮಾಡಬೇಕು ಮತ್ತು ಚಳವಳಿಯ ವ್ಯಾಪ್ತಿಯನ್ನು ಹೇಗೆ ಹೆಚ್ಚಿಸಬೇಕೆಂಬುದನ್ನು ಚರ್ಚಿಸುತ್ತಾರೆ.

**ನಿಮಗೆ ಆತ್ಮೀಯಸ್ವಾಗತ :** ಅಂತರ ರಾಷ್ಟ್ರೀಯ ಸಾಂಸ್ಕೃತಿ ಜಾಂಬೂರಿಯನ್ನು ಕರ್ನಾಟಕದ ಗೌರವಾನ್ವಿತ ರಾಜ್ಯಪಾಲರು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಸಂಸ್ಥೆಯ ಪೋಷಕರಾದ ಸನ್ಮಾನ್ಯ ಶ್ರೀ ಥಾವರ್‌ಚಂದ್ ಗೆಹ್ಲೋಟ್ ರವರು ಉದ್ಘಾಟಿಸಲಿದ್ದಾರೆ. ಕರ್ನಾಟಕದ ಗೌರವಾನ್ವಿತ ಮುಖ್ಯಮಂತ್ರಿಗಳು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಬಸವರಾಜ ಬೊಮ್ಮಾಯಿರವರು ಮತ್ತು ಕೇಂದ್ರ ಹಾಗೂ ರಾಜ್ಯ ಸರ್ಕಾರದ ಸಚಿವರುಗಳು ಭಾಗವಹಿಸಲಿದ್ದಾರೆ. ಕರ್ನಾಟಕದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಮುಖಂಡರು, ಪ್ರಸಿದ್ಧ ಕೈಗಾರಿಕೋದ್ಯಮಿಗಳು, ಪ್ರಖ್ಯಾತ ಸಾಹಿತಿಗಳು, ಶೈಕ್ಷಣಿ ಕತಜ್ಞರು ಮತ್ತು ಇತರ ಸಾಮಾಜಿಕ ನಾಯಕರುಗಳು ಭಾಗವಹಿಸಲಿದ್ದಾರೆ.

ಅಂತರ ರಾಷ್ಟ್ರೀಯ ಸಾಂಸ್ಕೃತಿಕ ಜಾಂಬೂರಿಯ ಯಶಸ್ಸಿಗೆ ತಮ್ಮ ಸಹಕಾರ ಅತ್ಯಮೂಲ್ಯ. ಆದುದರಿಂದ ಈ ಜಾಂಬೂರಿಯ ಆಯೋಜನೆಗೆ ಅಂದಾಜು 30 ಕೋಟಿಗಳಷ್ಟು ಹಣ ವೆಚ್ಚವಾಗುತ್ತಿದ್ದು, ತಾವು ತಮಗೆ ಅನುಕೂಲವಾಗುವಷ್ಟು ಹಣದ / ವಸ್ತುವಿನ ರೂಪದಲ್ಲಿ ಹಾಗೂ ಜಾಹಿರಾತುಗಳ ಮೂಲಕ ಆರ್ಥಿಕವಾಗಿ ಹಾಗೂ ಈ ಅಂತರಾಷ್ಟ್ರೀಯ ಜಂಬೀರಿಯ ಯಶಸ್ಸಿಗೆ ಕ್ರಿಯಾತ್ಮಕವಾಗಿ ತಮ್ಮ ಬೆಂಬಲ ಮತ್ತು ಸಹಕಾರವನ್ನು ನೀಡಬೇಕೆಂದು ತಮ್ಮಲ್ಲಿ ಪ್ರಾರ್ಥಿಸುತ್ತೇನೆ.

**"ಸಂಸ್ಕೃತಿಯಿಂದ ಯುವ ಜನರ ಏಕತೆ"**

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ

(ಪಿ.ಜಿ.ಆರ್. ಸಿಂಧ್ಯ)
ರಾಜ್ಯ ಮುಖ್ಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

(ಡಾ॥ ಮೋಹನ್ ಆಳ್ವ)
ಜಿಲ್ಲಾ ಮುಖ್ಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಕ್ಷಿಣ ಕನ್ನಡ ಜಿಲ್ಲೆ

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

**THE BHARAT SCOUTS AND GUIDES, KARNATAKA**

# 39, Shantigruha, Palace Road, Bengaluru - 560 001

Phone + 91+80-22260017, 22267470. E-mail: info@bsgkarnataka.org

**ಹೆಚ್ಚಿನ ವಿವರಗಳಿಗೆ:**

ಜಾಂಬೂರಿ ಕಾರ್ಯದರ್ಶಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ಅಂತರ ರಾಷ್ಟ್ರೀಯ ಸಾಂಸ್ಕೃತಿಕ ಜಾಂಬೂರಿ ಕಛೇರಿ
ಸ್ಕೌಟ್ಸ್-ಗೈಡ್ಸ್ ಕನ್ನಡ ಭವನ, ಮೂಡಬಿದರೆ - 574 227
Web: www.internationalculturaljamboree.org